


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 1941(2302)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್. ಎಂ. ರಮೇಶ ಗೌಡ(ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಮಾನ್ಯ ಕೃಷಿ ಸಚಿವರು

ವಿಷಯ : ರಾಜ್ಯದಲ್ಲಿ ಕೃಷಿ ಇಲಾಖೆಯಿಂದ ಕೈಗೆತ್ತಿಕೊಂಡಿರುವ ಫಲಾನುಭವಿ ಯೋಜನೆ ಕುರಿತು

(ಅ) ಕೃಷಿ ಇಲಾಖೆ ವತಿಯಿಂದ ಕೈಗೊಳ್ಳುತ್ತಿರುವ ಫಲಾನುಭವಿ ಆಧಾರಿತ ಯೋಜನೆಗಳು ಯಾವುವು; ಫಲಾನುಭವಿಗಳ ಆಯ್ಕೆಗೆ ಇರುವ ಮಾನದಂಡಗಳು ಯಾವುವು;

(ಆ) ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಈ ಯೋಜನೆಗಳಡಿ ಬಿಡುಗಡೆಯಾದ ಅನುದಾನ, ವೆಚ್ಚ ಹಾಗೂ ಫಲಾನುಭವಿಗಳ ವಿವರಗಳನ್ನು ಯೋಜನೆವಾರು/ತಾಲ್ಲೂಕುವಾರು ವಿವರವಾದ ಮಾಹಿತಿಗಳನ್ನು ಒದಗಿಸುವುದು;

(ಇ) ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಕೃಷಿಯಿಂದ ಆರ್ಥಿಕ ತೊಂದರೆಗೊಳಗಾಗಿ ಆತ್ಮಹತ್ಯೆ ಮಾಡಿಕೊಂಡಿರುವ ರೈತರುಗಳ ವಿವರ ಹಾಗೂ ಇವರುಗಳಿಗೆ ಸರ್ಕಾರದಿಂದ ದೊರಕಿರುವ ಪರಿಹಾರದ ವಿವರಗಳನ್ನು ಒದಗಿಸುವುದು;

(ಈ) ಕಳೆದ 3 ವರ್ಷಗಳಲ್ಲಿ ರಾಜ್ಯದಲ್ಲಿ ಕೃಷಿ ಕ್ಷೇತ್ರದ ಉತ್ಪಾದನೆ ಎಷ್ಟು; (ತಾಲ್ಲೂಕುವಾರು ಮಾಹಿತಿ ಒದಗಿಸುವುದು)

(ಉ) ಕೃಷಿ ಇಲಾಖೆಯಿಂದ ಯಾವ ಯಾವ ಬೆಳೆಗಳಿಗೆ ಬೆಂಬಲ ಬೆಲೆ ಘೋಷಿಸಲಾಗಿದೆ; ಎಷ್ಟು ಬೆಂಬಲ ಬೆಲೆ ನಿಗದಿಪಡಿಸಲಾಗಿದೆ? (ವಿವರ ನೀಡುವುದು)